# ಕರ್ನಾಟಕ ವಿಧಾನ ಪರಿಷತ್

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 348(430) |
| 2 | ಸದಸ್ಯರ ಹೆಸರು | : | ಶ್ರೀ. ಕೆ.ಟಿ. ಶ್ರೀಕಂಠೇಗೌಡ (ಪದವೀಧರ ಕ್ಷೇತ್ರ) |
| 3 | ಉತ್ತರಿಸುವ ದಿನಾಂಕ | : | 18.02.2022 |
| 4 | ಉತ್ತರಿಸುವ ಸಚಿವರು | : | ಮಾನ್ಯ ಯೋಜನಾ ಸಚಿವರು. |

***

| | ಪ್ರಶ್ನೆ | ಉತ್ತರ |
|---|---|---|
| (ಅ) | ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ ವಿಧಾನಸಭೆ/ವಿಧಾನ ಪರಿಷತ್ತು ಶಾಸಕರುಗಳಿಗೆ ಒಂದು ವರ್ಷಕ್ಕೆ ನಿಗದಿಪಡಿಸಿರುವ ಅನುದಾನವೆಷ್ಟು; ಸದರಿ ಅನುದಾನವನ್ನು ಹೆಚ್ಚಿಸುವ ಪ್ರಸ್ತಾವನೆಯು ಸರ್ಕಾರದ ಮುಂದೆ ಇದೆಯೇ; ಯಾವ ಕಾಲಮಿತಿಯಲ್ಲಿ ಹೆಚ್ಚಳ ಮಾಡಲಾಗುವುದು; | ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯ ಮಾರ್ಗಸೂಚಿ ಕಂಡಿಕೆ-1.3 ರನ್ವಯ 2013-14ನೇ ಸಾಲಿನಿಂದ ಪ್ರತಿ ಕ್ಷೇತ್ರಕ್ಕೆ ರೂ.200.00 ಲಕ್ಷಗಳನ್ನು ನಿಗದಿಪಡಿಸಲಾಗಿದೆ.<br>ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯ ಅನುದಾನವನ್ನು ಹೆಚ್ಚಿಸುವ ಪ್ರಸ್ತಾವನೆಯು ಸರ್ಕಾರದ ಮುಂದೆ ಇರುವುದಿಲ್ಲ ಹಾಗಾಗಿ ಕಾಲಮಿತಿಯು ಅನ್ವಯಿಸುವುದಿಲ್ಲ. |
| (ಆ) | ಮಾನ್ಯ ಶಾಸಕರ ಪದಾಧಿಕಾರದ ಅವಧಿಯಲ್ಲಿ ಅವರು ಪ್ರಸ್ತಾಪಿಸಿರುವ ಕಾಮಗಾರಿಗಳನ್ನು ಬದಲಾವಣೆ ಮಾಡುವ ಅಧಿಕಾರವನ್ನು ಕೇವಲ 2 ವರ್ಷಗಳಿಗೆ ಮಾತ್ರ ನಿರ್ದಿಷ್ಟಪಡಿಸಿರುವುದು ಸರಿಯೇ; | ಸರಿ.<br>ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯ ಮಾರ್ಗಸೂಚಿ ಕಂಡಿಕೆ-4.1 ರಲ್ಲಿ ನಿರ್ದಿಷ್ಟ ವರ್ಷದಲ್ಲಿ ಬಿಡುಗಡೆಯಾದ ನಿಧಿಗಳ ಪೈಕಿ ಬಳಕೆಯಾಗದೆ ಉಳಿದ ಹಣ ಜಿಲ್ಲಾಧಿಕಾರಿಗಳ ಬಳಿ ಇದ್ದರೆ, ಅದನ್ನು ಮುಂದಿನ ವರ್ಷದಲ್ಲಿ ಮಾತ್ರ ಉಪಯೋಗಿಸಬಹುದಾಗಿದೆ. ಸದರಿ ಮೊತ್ತವು ಮುಂದಿನ ವರ್ಷದ ಕೊನೆಯಲ್ಲಿ ಖರ್ಚಾಗದೇ ಉಳಿದರೆ ಆ ಮೊತ್ತವನ್ನು ರದ್ದುಪಡಿಸಲಾಗುವುದೆಂದು ಸ್ಪಷ್ಟವಾಗಿ ಸೂಚಿಸಲಾಗಿದೆ. |
| (ಇ) | ಇದರಿಂದ ಶಾಸಕರ ಅಧಿಕಾರವನ್ನು ಮೊಟಕುಗೊಳಿಸಿರುವುದು ನ್ಯಾಯ ಸಮ್ಮತವೇ (ವಿವರವಾದ ಮಾಹಿತಿ ನೀಡುವುದು;) | ಶಾಸಕರ ಅಧಿಕಾರವನ್ನು ಮೊಟಕುಗೊಳಿಸಿರುವುದಿಲ್ಲ. |
| (ಈ) | ಶಾಸಕರು ತಮ್ಮ ಮೊದಲನೇ ವರ್ಷದಲ್ಲಿ ತಮ್ಮ ಅನುದಾನದಲ್ಲಿ ಪ್ರಸ್ತಾಪಿಸಿದ ಕಾಮಗಾರಿಯನ್ನು ಅವರ ಪದಾಧಿಕಾರದ ಅವಧಿಯ 5ನೇ ವರ್ಷದಲ್ಲಿ ಕಾರಣಾಂತರಗಳಿಂದ ಅಧಿಕಾರ ಬದಲಾವಣೆ ಮಾಡಿರುವುದು ನಿಜವೇ; ಈ ಕಾಮಗಾರಿಯ ಅನುದಾನ ಎಷ್ಟು; (ವಿವರವಾದ ಮಾಹಿತಿ ನೀಡುವುದು;) | ಇಲ್ಲ<br>ಎರಡು ವರ್ಷ ಪೂರ್ಣಗೊಂಡ ನಂತರ ಪ್ರಾರಂಭವಾಗದೇ ಇರುವ ಕಾಮಗಾರಿಗಳನ್ನು ಮಾನ್ಯ ವಿಧಾನ ಪರಿಷತ್ ಸದಸ್ಯರ ಅನುದಾನದಲ್ಲಿ ಬದಲಾವಣೆ ಮಾಡಲು ಅವಕಾಶವಿರುವುದಿಲ್ಲ. ಪ್ರಸ್ತುತ ವಿಧಾನ ಪರಿಷತ್ ಸದಸ್ಯರ ಅನುದಾನದಲ್ಲಿ ಪ್ರಾರಂಭವಾಗದೇ ಇರುವ ಕಾಮಗಾರಿ ಮೊತ್ತ ರೂ.17.74 ಕೋಟಿಗಳು ಲಭ್ಯವಿದೆ. |

...2

| | ಪ್ರಶ್ನೆ | ಉತ್ತರ |
|---|---|---|
| (ಉ) | ಬಯಲು ಸೀಮೆ ಮಂಡಳಿಯಲ್ಲಿ ಪ್ರಸ್ತುತ ಸಾಲಿನಲ್ಲಿ ಸರ್ಕಾರದ ವಿವೇಚನಾ ಕೋಟಾದಡಿ ನಿಗದಿಪಡಿಸಿರುವ ಅನುದಾನವೆಷ್ಟು; ಇದರಲ್ಲಿ ಎಷ್ಟು ಕಾಮಗಾರಿಗಳಿಗೆ ಅನುದಾನ ನೀಡಲಾಗಿದೆ; ಉಳಿದಿರುವ ಬಾಕಿ ಹಣವೆಷ್ಟು? (ಕಾಮಗಾರಿವಾರು ವಿವರವಾದ ಮಾಹಿತಿ ನೀಡುವುದು) | ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಸರ್ಕಾರದ ವಿವೇಚನಾ ಕೋಟಾದಡಿ ರೂ.1.50 ಕೋಟಿಗಳನ್ನು ನಿಗದಿಪಡಿಸಲಾಗಿದ್ದು, ಸದರಿ ಅನುದಾನದಲ್ಲಿ 12 ಕಾಮಗಾರಿಗಳನ್ನು ಅನುಷ್ಠಾನಗೊಳಿಸಲಾಗಿದ್ದು, ಬಾಕಿ ಅನುದಾನ ಉಳಿದಿರುವುದಿಲ್ಲ. ಕಾಮಗಾರಿವಾರು ವಿವರವನ್ನು ಅನುಬಂಧ-1 ರಲ್ಲಿ ನೀಡಲಾಗಿದೆ. |

ಸಂಖ್ಯೆ: ಪಿಡಿಎಸ್ 15 ಕೆಎಲ್ಎಸ್ 2022

(ಮುನಿರತ್ನ)
ಮಾನ್ಯ ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖಾ ಸಚಿವರು.

## ಚುಕ್ಕೆಗುರುತಿಲ್ಲದ 348 (430) ರ ಅನುಬಂಧ-1

# ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿಯ ವತಿಯಿಂದ ಪ್ರಸಕ್ತ ಸಾಲಿನಲ್ಲಿ ಸರ್ಕಾರದ ವಿವೇಚನಾ ಕೋಟಾದಡಿ ಕೈಗೊಂಡಿರುವ ಕಾಮಗಾರಿವಾರು ವಿವರ

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಕಾಮಗಾರಿ ವಿವರ | ಅಂದಾಜು ಮೊತ್ತ | ಅನುಮೋದನೆ ನೀಡಿದ ಮೊತ್ತ |
|---|---|---|---|
| 1 | ತಿಪಟೂರು ತಾಲ್ಲೂಕು ನೆಲ್ಲಿಕೆರೆ ಗ್ರಾ.ಪಂ. ವ್ಯಾಪ್ತಿಯ ಕುಡುವನಘಟ್ಟ ಶಾಲಾ ಮುಂಭಾಗ ಕಾಂಪೌಂಡ್ ನಿರ್ಮಾಣ ಕಾಮಗಾರಿ | 5.00 | 5.00 |
| 2 | ತಿಪಟೂರು ತಾಲ್ಲೂಕು ನೆಲ್ಲಿಕೆರೆ ಗ್ರಾ.ಪಂ. ವ್ಯಾಪ್ತಿಯ ಕುಡುವನಘಟ್ಟ ಶಾಲಾ ಹಿಂಭಾಗ ಕಾಂಪೌಂಡ್ ನಿರ್ಮಾಣ ಕಾಮಗಾರಿ | 5.00 | 5.00 |
| 3 | ತಿಪಟೂರು ತಾಲ್ಲೂಕು ನೆಲ್ಲಿಕೆರೆ ಗ್ರಾ.ಪಂ. ಕೊನೇಗೌಡನಪಾಳ್ಯದ ಮಾರುತಿ ನಗರದ ವರದಯ್ಯನ ಮನೆಯಿಂದ ಹನುಮಂತಯ್ಯನ ಮನೆಯವರೆಗೆ ಸಿ.ಸಿ. ರಸ್ತೆ ನಿರ್ಮಾಣ ಕಾಮಗಾರಿ | 5.00 | 5.00 |
| 4 | ತಿಪಟೂರು ತಾಲ್ಲೂಕು ನೆಲ್ಲಿಕೆರೆ ಗ್ರಾ.ಪಂ. ಕೊನೇಗೌಡನಪಾಳ್ಯದ ಲಕ್ಷ್ಮೀಕಾಂತನ ಮನೆಯಿಂದ ಕೃಷ್ಣಪ್ಪನ ಮನೆಯವರೆಗೆ ಸಿ.ಸಿ. ರಸ್ತೆ ನಿರ್ಮಾಣ ಕಾಮಗಾರಿ | 5.00 | 5.00 |
| 5 | ತಿಪಟೂರು ತಾಲ್ಲೂಕು ನೆಲ್ಲಿಕೆರೆ ಗ್ರಾ.ಪಂ. ಧರ್ಮೆಗೌಡನಪಾಳ್ಯದ ಕುಂಬಾರ ಕಟ್ಟೆಯಿಂದ ಗೋವಿಂದಪ್ಪನ ಮನೆಯವರೆಗೆ ಸಿ.ಸಿ. ರಸ್ತೆ ನಿರ್ಮಾಣ ಕಾಮಗಾರಿ | 5.00 | 5.00 |
| 6 | ಹೊಸದುರ್ಗ ಪಟ್ಟಣದ ವೀರಭದ್ರ ದೇವಸ್ಥಾನದ ಹತ್ತಿರ ಇರುವ ಕನ್ನಡ ಮಾಧ್ಯಮ ಶಾಲೆಯ ಮುಂಭಾಗ ಕಾಂಪೌಂಡ್ ಹಾಗೂ ಶೌಚಾಲಯ ಹಾಗೂ ಉರ್ದು ಶಾಲೆಗೆ ಶೌಚಾಲಯ ನಿರ್ಮಾಣ | 50.00 | 50.00 |
| 7 | ಹೊಸದುರ್ಗ ತಾಲ್ಲೂಕು ನಾಯಿಗೆರೆ ಹತ್ತಿರ ಹರಿಯುವ ಹಳ್ಳಕ್ಕೆ ಕಾಸ್‌ವೇ ಕಂ ಚೆಕ್‌ಡ್ಯಾಂ ನಿರ್ಮಾಣ ಕಾಮಗಾರಿ | 50.00 | 50.00 |
| 8 | ಹೊಳಲ್ಕೆರೆ ತಾಲ್ಲೂಕು ಗುಂಡೇರಿ ಕಾಮಲು ರಿ.ಸ.ನಂ. 10 ರಲ್ಲಿ ಚೆಕ್‌ಡ್ಯಾಂ ನಿರ್ಮಾಣ ಕಾಮಗಾರಿ | 5.00 | 5.00 |
| 9 | ಹೊಳಲ್ಕೆರೆ ತಾಲ್ಲೂಕು ದಾಸಿಕಟ್ಟೆ ಗ್ರಾಮದ ರಿ.ಸ.ನಂ. 41,42 ರಲ್ಲಿ ಚೆಕ್‌ಡ್ಯಾಂ ನಿರ್ಮಾಣ ಕಾಮಗಾರಿ | 5.00 | 5.00 |
| 10 | ಹೊಳಲ್ಕೆರೆ ತಾಲ್ಲೂಕು ಬೋರೇನಹಳ್ಳಿ ಗ್ರಾಮದ ರಿ.ಸ.ನಂ. 4/2 ರಲ್ಲಿ ಚೆಕ್‌ಡ್ಯಾಂ ನಿರ್ಮಾಣ | 5.00 | 5.00 |
| 11 | ಚಿತ್ರದುರ್ಗ ತಾಲ್ಲೂಕು ಹಳೇರಂಗಾಪುರ ಗ್ರಾಮದ ರಿ.ಸ.ನಂ. 25/2 ರಲ್ಲಿ ಚೆಕ್‌ಡ್ಯಾಂ ನಿರ್ಮಾಣ | 5.00 | |
| 12 | ಚಿತ್ರದುರ್ಗ ತಾಲ್ಲೂಕು ಡಿ.ಮದಕರಿಪುರ ಗ್ರಾಮದ ರಿ.ಸ.ನಂ. 22 ರಲ್ಲಿ ಚೆಕ್‌ಡ್ಯಾಂ ನಿರ್ಮಾಣ ಕಾಮಗಾರಿ | 5.00 | |
| | **ಒಟ್ಟು** | **150.00** | **140.00** |